# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2137
ಉತ್ತರಿಸಬೇಕಾದ ದಿನಾಂಕ : 18.03.2022
ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ಸಚಿವರು : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರಿನಲ್ಲಿ ಕಂಠೀರವ ಸ್ಟೇಡಿಯಂನಲ್ಲಿ ಸಿಂಥೆಟಿಕ್ ಟ್ರ್ಯಾಕ್ ಅಳವಡಿಸುವ ಕಾರ್ಯ ಮುಗಿದಿದೆಯೇ; | ಬೆಂಗಳೂರಿನಲ್ಲಿ ಕಂಠೀರವ ಸ್ಟೇಡಿಯಂನಲ್ಲಿ ಸಿಂಥೆಟಿಕ್ ಟ್ರ್ಯಾಕ್ ಅಳವಡಿಸುವ ಕಾರ್ಯ ಮುಕ್ತಾಯಗೊಂಡಿದೆ. |
| ಆ) | ಸಿಂಥೆಟಿಕ್ ಟ್ರ್ಯಾಕ್ ಅಳವಡಿಸಲು ಆಗಿರುವ ವೆಚ್ಚವೆಷ್ಟು; (ವಿವರ ನೀಡುವುದು) | ಸಿಂಥೆಟಿಕ್ ಟ್ರ್ಯಾಕ್ ಅಳವಡಿಸಲು ದಿನಾಂಕ: 16.01.2020 ರಂದು ಕಾರ್ಯಾದೇಶ ಪತ್ರ ಸಂಖ್ಯೆ: ಡಿವೈಇಎಸ್/ ತಾಂ.ಶಾ / ಕ್ರಿಯೋ/95/2017-18ರಲ್ಲಿ ರೂ. 500.65 ಲಕ್ಷಗಳ ಕಾಮಗಾರಿಗೆ ಒಪ್ಪಿಗೆ ನೀಡಲಾಗಿದ್ದು, ಇಲ್ಲಿಯವರೆಗೂ ರೂ.389.00 ಲಕ್ಷಗಳನ್ನು ಗುತ್ತಿಗೆದಾರರಿಗೆ ಪಾವತಿಸಲಾಗಿರುತ್ತದೆ. |
| ಇ) | ಅಥ್ಲೆಟಿಕ್ಸ್ ಗಳಿಗೆ ಹಾಗೂ ಇತರೆ ಯಾವ ಆಟಗಾರರಿಗೆ ಅನುಕೂಲವಾಗುವಂತೆ ಸ್ಟೇಡಿಯಂನಲ್ಲಿ ವ್ಯವಸ್ಥೆ ಮಾಡಲಾಗಿದೆ? (ವಿವರ ನೀಡುವುದು) | ಶ್ರೀ ಕಂಠೀರವ ಕ್ರೀಡಾಂಗಣದಲ್ಲಿ 400 ಮೀ. ಸಿಂಥೆಟಿಕ್ ಟ್ರ್ಯಾಕ್ ಅಲ್ಲದೆ ಸಿಂಥೆಟಿಕ್ ಟೆನ್ನಿಸ್ ಅಂಕಣ, ಸಿಂಥೆಟಿಕ್ ಬಾಸ್ಕೆಟ್ ಬಾಲ್ ಅಂಕಣ, ವಾಲಿಬಾಲ್ ಅಂಕಣ, ಒಳಾಂಗಣ ಕ್ರೀಡಾಂಗಣವನ್ನು ನಿರ್ಮಾಣ ಮಾಡಲಾಗಿದ್ದು, ವೇಟ್ ಲಿಫ್ಟಿಂಗ್, ಬಾಲ್ ಬ್ಯಾಡ್ಮಿಂಟನ್, ಬಾಕ್ಸಿಂಗ್, ಫೆನ್ಸಿಂಗ್ ಕ್ರೀಡಾಪಟುಗಳಿಗೂ ಸಹ ಅನುಕೂಲವಾಗುವಂತೆ ಸೌಕರ್ಯಗಳನ್ನು ಕಲ್ಪಿಸಲಾಗಿದೆ. |

**ವೈಎಸ್‌ಡಿ/ಇಬಿಬಿ/64/2022**

**(ಡಾ|| ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.